ಪುಟ್ಟ ಮಕ್ಕಳಿಗೆ ಪ್ರಕೃತಿಯ ಕಥೆಗಳು

# ಎಲ್ಲಿದ್ದೀಯಪ್ಪಾ ಕಾಪರ್‌ಸ್ಮಿತ್!

ವಿದ್ಯಾ ಮತ್ತು ರಾಜಾರಾಮ್ ಶರ್ಮ
ಅನುವಾದ: ಶಾಂತಾ ಸುಬ್ಬ ರಾವ್

# ಎಲ್ಲಿದ್ದೀಯಪ್ಪಾ ಕಾಪರ್‌ಸ್ಮಿತ್!

ವಿದ್ಯಾ ಮತ್ತು ರಾಜಾರಾಮ್ ಶರ್ಮ
**ಅನುವಾದ: ಶಾಂತಾ ಸುಬ್ಬ ರಾವ್**

Vidya Online
A PARTNERSHIP FOR TEACHERS, CHILDREN AND EDUCATION

ಈ ಕಥೆ ದಕ್ಷಿಣ ದೆಹಲಿಯ ಒಂದು ಸಂಸ್ಥೆಯ ಆವರಣದಲ್ಲಿ 2013 ರ ಏಪ್ರಿಲ್–ಜೂನ್ ತಿಂಗಳಲ್ಲಿ ಮಾಡಿದ ಅವಲೋಕನೆಗಳನ್ನು ಆಧರಿಸಿದೆ.

ಈ ಪುಸ್ತಕದಲ್ಲಿ ಇರುವ ಚಿತ್ರಗಳು, ಪಕ್ಷಿಯ ಅಥವ ಗೂಡುಗಳ ನಿಜವಾದ ಗಾತ್ರವನ್ನು ತೋರಿಸದೇ ಇರಬಹುದು.






http://vidyaonline.net

ಪಕ್ಷಿಗಳ ಈ ತರಹದ ವರ್ತನೆಯನ್ನು ನಾನು ಎಂದೂ ನೋಡಿರಲಿಲ್ಲ. ನನಗೆ ತುಂಬಾ ಗಾಬರಿ ಆಯಿತು. ಕಂದು–ತಲೆಯ ಕುಟಿಗ, ಒಂದು ಚಿಕ್ಕ ಪಕ್ಷಿಯನ್ನು ಅದರ ಪೊಟರೆಯಿಂದ ಹೊರಕ್ಕೆ ಎಳೆಯುವ ಪ್ರಯತ್ನ ಮಾಡುತ್ತಿತ್ತು. ಈ ಪ್ರಯತ್ನದಲ್ಲಿ ಆ ಚಿಕ್ಕ ಪಕ್ಷಿಯ ಕೆಲವು ಪುಕ್ಕಗಳು ಕಿತ್ತು ಬಂದುವು.

ಆ ಪಕ್ಷಿಗೆ ಗಾಯವಾಗಿರಬಹುದಾ? ಅದಕ್ಕೆ ಮತ್ತೆ ಹಾರಲಿಕ್ಕೆ ಆಗುತ್ತದೆಯೋ ಇಲ್ಲವೋ? ಎಂದು ನನಗೆ ನಿಜವಾಗಿಯೂ ಬಹಳ ಗಾಬರಿಯಾಯಿತು. ಆದರೆ ನಾನು ಅಷ್ಟೊಂದು ಕಳವಳ ಪಡಬೇಕಾಗಿರಲಿಲ್ಲ.





ಕೆಲವೇ ಕ್ಷಣಗಳಲ್ಲಿ ಆ ಚಿಕ್ಕ ಪಕ್ಷಿ ಹೊರಗೆ ಬಂದು ಕುಟಿಗನನ್ನು ಲೆಕ್ಕಿಸದೇ ಹಾರಿ ಹೋಯಿತು. ಕುಟಿಗ ಮಾತ್ರ ಅದೇ ಜಾಗದಲ್ಲಿ ಕುಳಿತುಕೊಂಡಿತ್ತು. ಇದು ಮುಂದೆ ಏನು ಮಾಡುತ್ತೋ ಎಂದು ಕಾಯುತ್ತಾ ನಾನು ಅಲ್ಲೇ ನಿಂತೆ. ಅದು ನಿಜಕ್ಕೂ ಏನೋ ತರಲೆ ಮಾಡುವುದಕ್ಕೆ ಹೊಂಚು ಹಾಕುತ್ತಿದೆ ಎಂದು ಖಚಿತವಾಗಿ ಎನಿಸುತ್ತಿತ್ತು. ಪೊಟರೆ ಹತ್ತಿರ ಹೋಗಿ ಅದನ್ನು ದೊಡ್ಡದು ಮಾಡಲು ಶುರುಮಾಡಿತು!

“ಏಯ್, ನೀನು ಅದನ್ನು ಮಾಡದಿರು. ನಿನ್ನ ಪೊಟರೆಗೆ ನೀನು ಹೋಗು. ಅಷ್ಟಕ್ಕೂ ನಿನಗೆ ಎಷ್ಟು ಪೊಟರೆಗಳು ಬೇಕು!” ಎಂದು ಆತಂಕದಿಂದ ಕೂಗಿದೆ.

ಇದೇ ತರಹ ಇದ್ದ ಕಂದು–ತಲೆಯ ಕುಟಿಗ ಹೋದ ವರ್ಷ ಇದೇ ಮರದ

ಇನ್ನೊಂದು ಪೊಟರೆಯಲ್ಲಿ ಗೂಡು ಕಟ್ಟುವುದನ್ನು ನಾನು ನೋಡಿದ್ದೆ. ಇದು ಅದೇ ಪಕ್ಷಿ ಇರಬಹುದು ಎಂದು ಭಾವಿಸಿ, ಅದೇ ಪಕ್ಷಿ ಈಗ ಏಕೆ ಇನ್ನೊಂದು ಹೊಸ ಪೊಟರೆಯನ್ನು ಹುಡುಕುತ್ತಿದೆ ಎಂದು ಆಶ್ಚರ್ಯಪಟ್ಟೆ. ಅದು ಮೌನವಾಗಿ ಪೊಟರೆಯ ಬಾಯಿ ಅಗಲಿಸುವುದನ್ನು ತನ್ನ ಪಾಡಿಗೆ ತಾನು ಮುಂದುವರೆಸಿತ್ತು. ನಾನು ಅಷ್ಟಕ್ಕೆ ಬಿಟ್ಟುಬಿಡಲು ತಯಾರಿರಲಿಲ್ಲ.

“ಏಯ್, ಇಲ್ಲಿಂದ ಹೊರಟುಹೋಗು. ನಿನ್ನ ಗೂಡಿಗೆ ನೀನು ಹೋಗು. ನಿನಗೆ ಇನ್ನೂ ಎಷ್ಟು ಗೂಡುಗಳು ಬೇಕು?” ಎಂದು ಮತ್ತೆ ಕೂಗಿ ಹೇಳಿದೆ.

“ಅದೆಲ್ಲಾ ನಿನಗೆ ಏಕೆ ಬೇಕು? ಇಲ್ಲಿ ನೀನು ಏನು ಮಾಡುತ್ತಿದ್ದೀ?” ಎಂದು ಆ ಕುಟಿಗ ನನ್ನ ಕಡೆಗೆ ತಿರುಗಿ ನನ್ನನ್ನೇ ನಿಟ್ಟಿಸುತ್ತಾ ನಿಷ್ಠೂರವಾಗಿ ಕೇಳಿತು.





“ಓ! ಇಲ್ಲಿ ಒಂದು ಹಕ್ಕಿಯನ್ನು ಹುಡುಕುತ್ತಿರುವೆ” ಎಂದು ಜಂಬದಿಂದ ಉತ್ತರಿಸಿದೆ. “ಪಕ್ಷಿಗಳ ವೀಕ್ಷಣೆ ನನ್ನ ಹವ್ಯಾಸ. ನಾನು ಇದನ್ನು ಈಗ ಕೆಲವು ವರ್ಷಗಳಿಂದ ಮಾಡುತ್ತಾ ಬಂದಿದ್ದೇನೆ. ನಿನ್ನ ಬಗ್ಗೆ ಮತ್ತು ಇನ್ನೂ ಕೆಲವು ಪಕ್ಷಿಗಳ ಬಗ್ಗೆ ಸಾಕಷ್ಟು ವಿಷಯಗಳು ನನಗೆ ಗೊತ್ತು. ನೀನು ಏನೇನು ಮಾಡುವೆ ಎಂಬುದೂ ನನಗೆ ಗೊತ್ತು” ಆ ಪಕ್ಷಿ ನನ್ನ ಮಾತಿನಲ್ಲಿ ಯಾವ ಆಸಕ್ತಿಯನ್ನೂ ತೋರಲಿಲ್ಲ. ಪೊಟರೆಯ ಬಾಯನ್ನು ಅಗಲ ಮಾಡುವುದರಲ್ಲಿ ಮಗ್ನವಾಯಿತು.

ಹೂ ಬಿಡುವ ಕಾಲ ಮುಗಿದನಂತರ ಹಚ್ಚ ಹಸಿರು ಎಲೆಗಳಿಂದ ಸಿಂಗಾರಗೊಂಡಿದ್ದ ಹೆಬ್ಬೇವಿನ ಮರದ ತುಂಬಾ ಇದ್ದಕ್ಕಿದ್ದಂತೆ ಚಟುವಟಿಕೆಗಳು. ಪುಕ್ಕ ಎಳೆಸಿಕೊಂಡಿದ್ದ ಆ ಪುಟ್ಟ ಪಕ್ಷಿಯು ಅದೇ ತರಹದ ಇನ್ನೊಂದು ಪಕ್ಷಿಯ ಜೊತೆಗೂಡಿ ಕರ್ಕಶವಾಗಿ ಕೂಗಿಕೊಳ್ಳುತ್ತಾ ಕಂದು–ತಲೆಯ ಕುಟಿಗನನ್ನು ಬೆದರಿಸಿ ಓಡಿಸಲು ಪ್ರಯತ್ನಿಸುತ್ತಿತ್ತು.

ಈ ಜಗಳ ಹೇಗೆ ಶುರುವಾಯಿತೋ ಹಾಗೇ ಬೇಗನೆ ನಿಂತೂ ಹೋಯಿತು. ಮತ್ತೆ ಎಲ್ಲವೂ ಶಾಂತವಾಗಿತ್ತು. ನಾನು ನೆಮ್ಮದಿಯ ನಿಟ್ಟುಸಿರು ಬಿಟ್ಟೆ! ಆದರೆ ಆ ನೆಮ್ಮದಿ ಬಹಳ ಕಾಲ ಉಳಿಯಲಿಲ್ಲ. ತಮ್ಮ ಪೊಟರೆಯ ಸಮೀಪಕ್ಕೆ ಬರುವ ಸಾಹಸ ಮಾಡುತ್ತಿದ್ದ ಎಲ್ಲ ಜೀವಿಗಳನ್ನು ಆ ಎರಡು ಪುಟ್ಟ ಪಕ್ಷಿಗಳು ಬೆದರಿಸಿ ಓಡಿಸುತ್ತಿದ್ದುವು. ಒಂದು ಜೊತೆ ಬೈತಲೆ ಬಸವಿ ಮತ್ತು ಒಂದು ಕೊರವಂಕ, ಈ ಬೆದರಿಕೆಗೆ ಒಳಗಾಗಿದ್ದುವು. ಕರ್ಕಶ ಕಿರುಚಾಟ, ಬುಸ್ಸೆಂದು ಕೂಗುವ ಕರೆಗಳು, ಅಟ್ಟಿಸಿಕೊಂಡು ಹೋಗುವುದು ಮತ್ತು ಅತ್ತಿಂದಿತ್ತಲಿನ ಹಾರಾಟ ನಡೆದೇ ಇತ್ತು.

ಆ ಕಂದು–ತಲೆಯ ಕುಟಿಗಕ್ಕೆ ಆತಂಕ ಆಗಿದ್ದಿರಬೇಕು. ಅಲ್ಲಿಂದ ಹಾರಿ ಹೋದ ಅದು ಮತ್ತೆ ಬೇಗನೆ ಅಲ್ಲಿಗೇ ಹಿಂದಿರುಗಿ ಬಂತು. ಅದರೊಡನೆ ಹೆಣ್ಣು ಕುಟಿಗವೂ ಈಗ ಸೇರಿಕೊಂಡಿತ್ತು. ಇವೆರಡೂ ಆ ಮರದಲ್ಲಿದ್ದ ಹಿಂದಿನ ವರ್ಷ





ಉಪಯೋಗಿಸಿಕೊಂಡಿದ್ದ ಇನ್ನೊಂದು ಪೊಟರೆಯನ್ನು ಪರೀಕ್ಷಿಸತೊಡಗಿದುವು. ಆ ಪೊಟರೆಯಿಂದ ಒಂದು ಅಳಿಲು ಹೊರಕ್ಕೆ ಬಂತು!

“ಓಹ್!” ಎಂದು ಬೆರಗಾಗುತ್ತಾ ಕೂಗಿದೆ. “ಈಗ ಎಲ್ಲವೂ ಸ್ಪಷ್ಟವಾಗುತ್ತಿದೆ. ಆ ಕಂದು–ತಲೆಯ ಕುಟಿಗಗಳಿಗೆ ಗೂಡೇ ಇರಲಿಲ್ಲ!” ಕುಟಿಗಗಳ ಸ್ಥಿತಿ ನೋಡಿ ನನಗೆ ದುಃಖವಾಯಿತು. ಕುಟಿಗಗಳ ಪೊಟರೆಯೊಳಕ್ಕೆ ಅತಿಕ್ರಮಣ ಮಾಡಿ ಅವಕ್ಕೆ ತೊಂದರೆ ಕೊಟ್ಟಿದ್ದಕ್ಕೆ ಅಳಿಲಿಗೆ ಎಚ್ಚರಿಕೆ ಕೊಟ್ಟೆ.

“ಅದೆಲ್ಲಾ ನಿಂಗೇಕೆ? ನೀನು ಇಲ್ಲೇನು ಮಾಡುತ್ತಿದ್ದೀ?” ಅಳಿಲು ಸಿಟ್ಟಿನಿಂದ ಕೇಳಿತು.

“ಓಹ್! ನಾನು ಹುಡುಕುತ್ತಿರುವುದು–” ನನ್ನ ಉತ್ತರಕ್ಕೆ ಕಾಯದೇ ಆ ಅಳಿಲು

ಬಲು ಪರಿಶ್ರಮದಿಂದ ತೊಗಟೆಯ ಚೂರುಗಳನ್ನು ಸಂಗ್ರಹಿಸಿಕೊಂಡು ಅದನ್ನು ಉರುಳಿಸುತ್ತಾ ಗೂಡಿಗೆ ಅವಸರ ಅವಸರವಾಗಿ ಹಿಂತಿರುಗಿ ಬಂತು.

ಇಷ್ಟೊಂದು ಪ್ರಾಣಿಗಳು ಇಷ್ಟೊಂದು ಕಾರ್ಯಗಳಲ್ಲಿ ನಿರತರಾಗಿರುವುದು! ಈ ಎಲ್ಲಾ ಪ್ರಾಣಿಗಳ ಕಾರ್ಯ ಚಟುವಟಿಕೆಗಳನ್ನು ನೋಡುತ್ತಾ ಅಲ್ಲಿಯೇ ನಿಂತಿದ್ದೆ. ಆಗ ಒಂದು ಕೊರವಂಕ ಪಕ್ಷಿ ಹಾರಿ ಬಂದು ಆ ಚಿಕ್ಕ ಪೊಟರೆಯ ಬಳಿ ಇದ್ದ ಕೊಂಬೆಯ ಮೇಲೆ ಕುಳಿತುಕೊಂಡಿತು. ಅದೇ ವೇಳೆಗೆ ಆ ಸಣ್ಣ ಪಕ್ಷಿ ತನ್ನ ಕೊಕ್ಕಿನ ಭರ್ತಿ ಮಾಗಿದ ಅತ್ತಿಹಣ್ಣು, ಸುಮಾರು ಮೂರು ಇದ್ದಿರಬಹುದು, ತನ್ನ ದೃಢವಾದ ಕೊಕ್ಕಿನಲ್ಲಿ ತುಂಬಿಕೊಂಡು ಅಲ್ಲಿಗೆ ಬಂತು. ಅವಳಿಗೆ ದಿಗ್ಭ್ರಮೆ ಆಯಿತು. ತನ್ನ ಪೊಟರೆಯೊಳಕ್ಕೆ ಹೋಗಲು ಆ ದೊಡ್ಡ ಕೊರವಂಕನನ್ನು ದಾಟಿ ಹೋಗಬೇಕಿತ್ತು. ಗೂಡಿನೊಳಗೆ ಹಸಿದ ಅವಳ ಕಂದಮ್ಮಗಳು ಇದ್ದಿರಬೇಕು.





ಎಚ್ಚರಿಕೆಯಿಂದ ಆ ಕೊರವಂಕನ ಹತ್ತಿರ, ಹತ್ತಿರ... ಹತ್ತಿರ ನಿಧಾನವಾಗಿ ತೆವಳುತ್ತಾ ತೆವಳುತ್ತಾ ಸಾಗಿತು. ಪ್ರತಿ ಹೆಜ್ಜೆ ಇಡುವಾಗಲೂ ಕೊರವಂಕ ಏನಾದರೂ ತೊಂದರೆ ಕೊಡುತ್ತದೆಯೋ ಎಂದು ನಿಂತು ಯೋಚಿಸಿ ಯೋಚಿಸಿ ಮುಂದೆ ಹೋಗುತ್ತಿತ್ತು. ಹಣೆಯ ಬಿಗುವನ್ನು ಹೆಚ್ಚಿಸಿಕೊಂಡು ತನ್ನ ಕೆಂಪು ಪುಕ್ಕಗಳನ್ನು ಬೆದರಿಸುವ ರೀತಿಯಲ್ಲಿ ನಿಮಿರಿಸಿಕೊಂಡಿತು. ಕೊರವಂಕನ ಕಡೆಗೆ ಒಂದು ವಾರೆ ನೋಟ, ಕೊಂಬೆಯ ಮೇಲೆ ಬೇಗ ಸ್ವಲ್ಪ ಸ್ವಲ್ಪವೇ ತೆವಳುವಿಕೆ, ಸ್ವಲ್ಪ ನಿಲ್ಲುವುದು, ಇನ್ನೊಂದು ವಾರೆ ನೋಟ ಮತ್ತು ಸ್ವಲ್ಪ ತೆವಳುವಿಕೆ. ಇದು ಮುಂದುವರೆದು ಕಡೆಗೂ ಅದು ತನ್ನ ಗೂಡಿನ ಬಳಿಗೆ ತಲಪಿತ್ತು.

ಕಟ್ಟಕಡೆಗೆ ಇನ್ನೊಂದು ವಾರೆ ನೋಟ ಬೀರಿ, ಇನ್ನೊಮ್ಮೆ ತನ್ನ ಕೆಂಪು ಪುಕ್ಕಗಳನ್ನು ನಿಮಿರಿಸಿ ... ಸರ್ರನೆ ತನ್ನ ಗೂಡಿನೊಳಕ್ಕೆ ಹೋಯಿತು!

ಅಬ್ಬಾ! ನನಗೆ ಬಹಳ ಸಮಾಧಾನವಾಯಿತು.  ಆ ಚಿಕ್ಕ ಪಕ್ಷಿಯನ್ನು ಹೆದರಿಸಬೇಡ, ಇಲ್ಲಿಂದ ಹೊರಟು ಹೋಗು ಎಂದು ಆ ಕೊರವಂಕನನ್ನು ಎಷ್ಟು ಸಾಧ್ಯವೋ ಅಷ್ಟೂ ವಿನಯದಿಂದ ಕೇಳಿಕೊಂಡೆ. ಆ ಕೊರವಂಕ ನನ್ನನ್ನು ತಣ್ಣಗೆ ನೋಡುತ್ತಾ ಆಗ್ರಹದಿಂದ ಕೇಳಿತು: "ನೀನು ಇಲ್ಲೇನು ಮಾಡುತ್ತಿರುವೆ?"

"ನಾನು ಒಂದು ಪುಟ್ಟ ಹಸಿರು ಪಕ್ಷಿಯನ್ನು ಹುಡುಕುತ್ತಿರುವೆ. ಮಡಿವಾಳವು–"

"ಏನು! ಮಡಿವಾಳಗಳೇ? ಅವು ಹಸಿರಾಗಿ ಇರುವುದಿಲ್ಲವಲ್ಲ!"

"ಹಾಗಲ್ಲ ... ತಾಯಿ ಮಡಿವಾಳವು ಸಣ್ಣ ಹಸಿರು ಪಕ್ಷಿಯನ್ನು ಹುಡುಕಲು ನನಗೆ ಹೇಳಿತ್ತು".





"ಹಾಗೋ?  ಅದನ್ನೇಕೆ ಹುಡುಕಬೇಕೋ?" ಎಂದು ಕೇಳಿತು ಆ ಕೊರವಂಕ.

"ನಾನು ಅದನ್ನು ಹುಡುಕಲೇ ಬೇಕು... ನಾನು ಅದಕ್ಕಾಗಿ ತುಂಬಾ ಸಮಯದಿಂದ ಹುಡುಕುತ್ತಲೇ ಇದ್ದೇನೆ. ನಾನು–"

"ಆಯಿತು ... ಆಯಿತು, ನಿನಗೇನು ಬೇಕೋ ಅದನ್ನೇ ಮಾಡು. ನಿನಗೆ ಬೇಕಿರುವ ಆ ಪಕ್ಷಿಯನ್ನು ಧಾರಾಳವಾಗಿ ಪ್ರಯತ್ನ ಪಟ್ಟು ಹುಡುಕು, ಹುಡುಕುತ್ತಲೇ ಇರು" ಎಂದು ಅಸಹನೆಯಿಂದ ಹೇಳಿ ಆ ಕೊಂಬೆಯ ಮೇಲೆ ಕುಳಿತೇ ಇತ್ತು.

ಆ ಪುಟ್ಟ ಹಸಿರು ಹಕ್ಕಿಯ ಹುಡುಕಾಟ ಬಲು ದೀರ್ಘ ಕಾಲದ್ದು.  ಹತ್ತಿರ ಹತ್ತಿರ ಮೂರು ತಿಂಗಳಿಂದ ಆ ಹಕ್ಕಿಯನ್ನು ಹುಡುಕುತ್ತಿದ್ದೇನೆ ಎಂದಷ್ಟೇ ನಾನು ಆ

ಕೊರವಂಕನಿಗೆ ಹೇಳಬೇಕಾಗಿತ್ತು. ಪಕ್ಷಿಗಳ ಬಗ್ಗೆ ಒಂದು ವಿಚಿತ್ರ ಸಂಗತಿ ಇದೆ. ಅವು ಛಳಿಗಾಲದಲ್ಲಿ ಅದೇಕೋ ಶಾಂತವಾಗಿರುತ್ತವೆ. ಅವುಗಳ ಇರುವಿಕೆಯೇ ಗೊತ್ತಾಗುವುದಿಲ್ಲ. ಛಳಿಗಾಲ ಮುಗಿದು ಬೇಸಿಗೆ ಶುರುವಾಗುತ್ತಿದ್ದಂತೆ ಅವುಗಳ ಚಿಲಿಮಿಲಿ ಸದ್ದು ಹೆಚ್ಚಾಗುತ್ತಾ ಹೋಗುತ್ತದೆ.  ಆ ಎಲ್ಲ ಚಿಲಿಮಿಲಿ ಸದ್ದುಗಳ ನಡುವೆ ಒಂದು ಪಕ್ಷಿಯ 'ಟುಕ್ ಟುಕ್' ಕೂಗು ನನಗೆ ಕೇಳಿಸಿತ್ತು. ಆದರೆ ಆ ಪಕ್ಷಿಯನ್ನು ನಾನು ಕಂಡಿರಲಿಲ್ಲ.

ಫೆಬ್ರುವರಿ ತಿಂಗಳು ಶುರುವಾಗುತ್ತಿದ್ದಂತೆ ಆ 'ಟುಕ್ ಟುಕ್' ಕೂಗು ಕೇಳಿಸಲು ಶುರುವಾಯಿತು.  ಆದರೆ ಆ ಪಕ್ಷಿ ಪದೇ ಪದೇ ಕೂಗುತ್ತಿರಲಿಲ್ಲ ಮತ್ತು ದೀರ್ಘ ಕಾಲ ಕೂಗುತ್ತಿರಲಿಲ್ಲ.  ಮಾರ್ಚ್ ತಿಂಗಳ ಮಧ್ಯಭಾಗದ ಹೊತ್ತಿಗೆ ಅದರ ಆ ಕೂಗು ಗಟ್ಟಿಯಾಗಿ ಮತ್ತು ಸ್ಪಷ್ಟವಾಗಿ ಕೇಳುತ್ತಿತ್ತು.  ಆ ಪಕ್ಷಿ 'ಟುಕ್ ಟುಕ್'





ಎಂಬ ಕರೆಯನ್ನು ಹೇಗೆ ಮಾಡುತ್ತದೆ ಎಂಬುದು ನನಗೆ ಚೆನ್ನಾಗಿ ಗೊತ್ತಿತ್ತು. ಮೊದಲು ಮೆಲ್ಲಗೆ ಶುರುಮಾಡಿ, ಆಮೇಲೆ ಉಚ್ಚ ಮಟ್ಟಕ್ಕೆ ಏಕರೀತಿಯಲ್ಲಿ ಆ ಧ್ವನಿ ಏರುತ್ತಿತ್ತು. ಅದು ಎಷ್ಟು ಹೊತ್ತು ಕೂಗುತ್ತದೆ ಎಂಬುದನ್ನೂ ನಾನು ಒಮ್ಮೆ ಅಳೆದು ನೋಡಿದ್ದೆ – ಪೂರ್ತಿ ಒಂದು ನಿಮಿಷ, ತಡೆರಹಿತವಾಗಿ. ಅದು ಕೂಗುವುದನ್ನು ನಿಲ್ಲಿಸಿದಾಗ ನನ್ನ ಉಸಿರೇ ನಿಂತಂತೆ ಆಗಿತ್ತು. 'ಟುಕ್ ಟುಕ್' ಶಬ್ದಗಳ ನಡುವೆ ಯಾವಾಗಲೂ ಸಮ ಅಂತರ ಇರುತ್ತಿತ್ತು.

ಒಂದು ದಿನ–ಪ್ರಾಯಃ ಏಪ್ರಿಲ್ ಕೊನೆಯಲ್ಲಿ ಇರಬಹುದು ಎಂದುಕೊಳ್ಳುತ್ತೇನೆ, ನಮ್ಮ ಮಹಡಿ ಮನೆಯ ಹಿಂದಿನಿಂದ 'ಟುಕ್ ಟುಕ್' ಶಬ್ದ ಕೇಳಿ ಬರುತ್ತಿತ್ತು. ಕೂಡಲೆ ಲಘುಬಗೆಯಿಂದ ಕೆಳಗಿಳಿದು ಮನೆಯ ಹಿಂಭಾಗಕ್ಕೆ ಹೋದೆ. ಅಲ್ಲಿ ಒಂದು ಗಂಡು ಮಡಿವಾಳವು ಹಾಡುತ್ತಾ ಕುಳಿತಿದ್ದನ್ನು ಕಂಡೆ. ಈ ಪಕ್ಷಿ ನನಗೆ

ಹುಚ್ಚು ಹಿಡಿಸಿತ್ತು, ಅದರ ಬಗ್ಗೆ ಕೋಪವೂ ಇತ್ತು. ಇದು ಪ್ರತಿನಿತ್ಯವೂ ಬೆಳಗಿನ ಮೊದಲ ಸೂರ್ಯ ಕಿರಣ ಬೀಳುವ ಹೊತ್ತಿಗೆ ಸರಿಯಾಗಿ ಗಟ್ಟಿಯಾಗಿ ಹಾಡಲು ಶುರು ಮಾಡುತ್ತಿತ್ತು. ಯಾವಾಗಲೂ ಒಂದೇ ಮರದ ಅದೇ ಕೊಂಬೆಯ ಮೇಲೆ ಅದು ಕುಳಿತಿರುವುದನ್ನು ಕಿಟಕಿಯ ಮೂಲಕ ನಿದ್ದೆಗಣ್ಣಿನಲ್ಲಿಯೇ ನೋಡುತ್ತಿದ್ದೆ. ಅದು ಬಹುಮಟ್ಟಿಗೆ ಅದೇ ಒಣಗಿದ ಕೊಂಬೆಯ ಮೇಲೆ ಕುಳಿತು ಒಂದೇ ಸಮನೆ ಹಾಡುತ್ತಿರುತ್ತಿತ್ತು.

ನಾನು ಅಲ್ಲಿಗೆ ಬಂದ ಉದ್ದೇಶವನ್ನೇ ಮರೆತು 'ನಿಂಗೆ ಬಾಯಿ ಮುಚ್ಚಿಕೊಂಡು ಸುಮ್ಮನೆ ಇರುವುದಕ್ಕೆ ಆಗಲ್ವಾ' ಎಂದು ಕೋಪದಿಂದಲೇ ಕೇಳಿದೆ. ನನ್ನ ಕಿರುಚಾಟ ಅದಕ್ಕೆ ಅದೆಷ್ಟು ಗಾಬರಿ ತರಿಸಿರಬೇಕು ಎಂದರೆ ಆ ಪಾಪದ ಪಕ್ಷಿಯ ಹಾಡು ನಿಂತಿತು. ತನ್ನ ಪೊಟರೆಯೊಳಕ್ಕೆ ಹೋಗುತ್ತಿದ್ದ ಹೆಣ್ಣು ಮಡಿವಾಳವು ನನ್ನನ್ನು





ಕಂಡು ಅಲ್ಲಿಯೇ ನಿಂತು ವರ್ಷದ ಈ ಋತುವಿನಲ್ಲಿ 'ಅವನು' ಕೂಗುವುದನ್ನು ನಿಲ್ಲಿಸಬಾರದಿತ್ತು ಎಂದು ನನಗೆ ಹೇಳಿತು. ಅಷ್ಟರ ಒಳಗೆ ಆ ಗಂಡು ಮಡಿವಾಳ ತಾನು ಹಾಡುವುದನ್ನು ಪುನರಾರಂಭಿಸಿತ್ತು. ಆಗ ಆ ಹೆಣ್ಣು ಮಡಿವಾಳವು ನನಗೆ ವಿವರಿಸಿ ಹೇಳಿತು: ಗೂಡು ಕಟ್ಟುವ ಸಮಯದಲ್ಲಿ ಪಕ್ಷಿಗಳಿಗೆ ಸಂಭಾಷಿಸಲು ಬಹಳ ಇರುತ್ತವೆ. ಆ ಸಮಯದಲ್ಲಿಯೇ ಅವು ಹೆಚ್ಚು ಹೆಚ್ಚು ಕೂಗುತ್ತವೆ, ಹಾಡುತ್ತವೆ. ಪಕ್ಷಿಗಳು ಹಾಡುವುದಕ್ಕೂ ಕೂಗುವುದಕ್ಕೂ ಇರುವ ವ್ಯತ್ಯಾಸವನ್ನು ಆ ಹೆಣ್ಣು ಮಡಿವಾಳ ನನಗೆ ವಿವರಿಸಿತು. ಗಂಡು ಮಡಿವಾಳ ಹಾಡಲೂ ಬಹುದು; ಹೆಣ್ಣು ಮಡಿವಾಳಕ್ಕೆ ಕೂಗುವುದು ಮಾತ್ರ ಸಾಧ್ಯವಂತೆ!

ಹೀಗೆ ಮಾತಾಡುತ್ತಾ ಇರುವಾಗ, ನಾನು 'ಟುಕ್... ಟುಕ್... ಟುಕ್' ಎಂದು ಧ್ವನಿ ಹೊರಡಿಸುವ ಪಕ್ಷಿಯನ್ನು ಹುಡುಕುವುದರಲ್ಲಿ ನನ್ನ ಪ್ರಯತ್ನಗಳು ವಿಫಲವಾಗಿದ್ದನ್ನು

ಅವಳ ಬಳಿ ಹೇಳಿಕೊಂಡಿದ್ದೆ. “ಯಾಕೆ? ಅದು ಕಾಪರ್‌ಸ್ಮಿತ್! ಅವುಗಳ ಕೂಗುವಿಕೆ, ತಾಮ್ರ ಬಡಿಯುವಾಗ ಉಂಟಾಗುವ ‘ಟುಕ್ ಟುಕ್’ ನಂತೆಯೇ ಕೇಳುವುದಿಲ್ಲವೇ?” ಎಂದಿತು ಆ ಹೆಣ್ಣು ಮಡಿವಾಳ. ಚಕಿತಗೊಂಡಿದ್ದ ನನ್ನನ್ನು ಕಂಡು “ಅದೊಂದು ಸಣ್ಣ ಹಸಿರು ಪಕ್ಷಿ. ಅದರ ಕೊಕ್ಕಿನ ಕೆಳ ಭಾಗದಲ್ಲಿ ಬಿರುಕೂದಲು ಇರುತ್ತವೆ, ಎಲ್ಲಾ ಕುಟಿಗಗಳಲ್ಲಿ ಇರುವಂತೆ” ಎಂದಿತು. ಆದಾಗ್ಯೂ ಕಾಪರ್‌ಸ್ಮಿತ್‌ಗಳು ಕೂಗುತ್ತವೆಯೋ ಹಾಡುತ್ತವೆಯೋ ಎಂದು ಅವಳಿಗೆ ಗೊತ್ತಿರಲಿಲ್ಲ.

ಆ ಪುಟ್ಟ ಹಸಿರು ಪಕ್ಷಿಯನ್ನು ನಾನು ಹುಡುಕಲು ಪ್ರಾರಂಭಿಸಿದ್ದು ಹೀಗೆ. ತಮಾಷೆಯ ವಿಷಯ ಏನೆಂದರೆ, ‘ಟುಕ್ ಟುಕ್’ ಶಬ್ದ ಎಲ್ಲಿಂದ ಬರುತ್ತಿದೆ ಎಂದು ಗಮನಿಸಿ ಆ ಜಾಗದ ಹತ್ತಿರ ಹೋದಂತೆಲ್ಲ ಆ ಸದ್ದು ಇನ್ನೆಲ್ಲಿಂದಲೋ ಬರುತ್ತಿರುವಂತೆ ತೋರುತ್ತಿತ್ತು!





“ಇಲ್ಲಿ ನೋಡು!” ಎಂದು ಕೊರವಂಕ ಇದ್ದಕ್ಕಿದ್ದಂತೆ ಕೂಗಿಕೊಂಡಿತು. ‘ಅದೇನಾ, ನೀನು ಹುಡುಕುತ್ತಿದ್ದ ಆ ಹಸಿರು ಪಕ್ಷಿ! ನೀನು ಅಂದುಕೊಂಡಿರುವಂತೆ ಪುಟ್ಟ ಪಕ್ಷಿಯೇ ಅಲ್ಲವೇ?” ಎಂದು ತಡೆಯಿಲ್ಲದೆ ಗಹಗಹಿಸಿ ನಗತೊಡಗಿತು. ಅದು ಹಾಗೆ ನನ್ನನ್ನು ಚುಡಾಯಿಸಿದ್ದು ನನಗೆ ಇಷ್ಟವಾಗಲಿಲ್ಲ. ಆದರೂ ಮೇಲೆ ನೋಡಿದೆ.

ಗುಲಾಬಿ ವರ್ಣದ ಕೊರಳುಂಗುರವಿದ್ದ ಗಂಡು ಹಸಿರು ಗಿಣಿಯೊಂದು ಮೇಲಿನ ಕೊಂಬೆಯ ಮೇಲೆ ಬಂದು ಕುಳಿತಿತು. ಮುಂದೇನಾಯಿತು ಎಂಬುದು ನನಗೆ ನಿಜಕ್ಕೂ ಆಶ್ಚರ್ಯಜನಕವಾಗಿತ್ತು. ಅದರ ಹಿಂದೆಯೇ ಗಂಡಿಗಿಂತ ವಿಭಿನ್ನವಾದ, ಗುಲಾಬಿ ಇಲ್ಲವೇ ಕಪ್ಪನೆಯ ಕೊರಳುಂಗುರವಿರದಿದ್ದ ಹೆಣ್ಣು ಹಸಿರು ಗಿಣಿ ಅವನೆಡೆಗೆ ಹಾರಿ ಬಂತು. ಗಂಡು ಗಿಣಿ ತನ್ನೆಡೆಗೆ ಹಾರಿ ಬಂದಿದ್ದ ಹೆಣ್ಣು ಗಿಣಿಗೆ ಗುಟುಕು ಕೊಡುವುದನ್ನು ನಾನು ಬಾಯಿ ಬಿಟ್ಟುಕೊಂಡು ನೋಡುತ್ತಿದ್ದೆ.

“ಓಹ್! ಇದೊಳ್ಳೆ ತಮಾಷೆಯಾಗಿದೆ. ಕಾರಿಕೊಳ್ಳುವಿಕೆ ಎಂದರೆ ಇದೇ ಇರಬೇಕು!” ಎಂಬ ಮಾತುಗಳು ನನ್ನ ಬಾಯಿಂದ ಬಂದುವು.

ಇದು ಅಲ್ಲಿಗೇ ನಿಲ್ಲಲಿಲ್ಲ! ತನ್ನ ಬಾಯಿ ತುಂಬಾ ಆಹಾರವನ್ನು ತುಂಬಿಕೊಂಡ ಅವಳು ತನ್ನ ಗೂಡಿನತ್ತ ಹಾರಿಹೋದಳು. “ಇನ್ನೊಂದು ಪೊಟರೆ! ಇನ್ನೊಂದು ಗೂಡು!” ಎಂದು ಉದ್ರೇಕದಿಂದ ಕೂಗಿದೆ.

ಆ ಗಂಡು ಗಿಣಿ ತಾನೇ ಏಕೆ ಮರಿಗಳಿಗೆ ನೇರವಾಗಿ ಆಹಾರ ಉಣಿಸಲಿಲ್ಲ ಎಂದು ಆಶ್ಚರ್ಯಪಟ್ಟೆ. ಈ ಯೋಚನೆ ನನ್ನಲ್ಲಿ ಬಂದೊಡನೆ, “ಏನಿದು, ವಿಚಿತ್ರ? ಮರಿಗಳಿಗೆ ಹೇಗೆ ಆಹಾರ ಉಣಿಸಬೇಕು ಎಂಬುದು ನಿನಗೆ ಗೊತ್ತಿಲ್ಲವೇ?” ಎಂದು ಅವಿಚಾರಿಯಾಗಿ ಕೇಳಿದೆ.





“ನೀನು ಇಲ್ಲೇನು ಮಾಡುತ್ತಿದ್ದೀಯೆ? ನಿನ್ನ ಕೆಲಸ ನೀನು ನೋಡಿಕೊ, ಹೋಗು” ಎಂಬ ಒರಟು ಉತ್ತರ ಬಂತು.

“ನೀನು ಹೇಳಿದ್ದು ಖಂಡಿತಾ ಸರಿಯಾಗಿಯೇ ಇದೆ. ನಾನು ಇಲ್ಲಿಗೆ ನನ್ನ ಕೆಲಸದ ಮೇಲೇ ಬಂದಿರುವೆ. ಪುಟ್ಟ ಹಸಿರು ಪಕ್ಷಿಯನ್ನು ಹುಡುಕುತ್ತಾ ಇಲ್ಲಿಗೆ ಬಂದಿದ್ದೇನೆ,” ಎಂದು ಆದಷ್ಟೂ ಹಿರಿಮೆಯಿಂದಲೇ ಹೇಳಿದೆ. “ನಾನು ಕಾಪರ್‌ಸ್ಮಿತ್ ಪಕ್ಷಿಯನ್ನು ಹುಡುಕಲು ಬಂದಿರುವೆ.”

ನನ್ನ ಕಡೆಗೆ ಶೀತಲ ನೋಟ ಬೀರುತ್ತಾ “ನೀನು ಏನನ್ನು ನೋಡಲು ಬಂದಿರುವೆಯೋ ಅದನ್ನು ಎಲ್ಲಿ ಹೇಗೆ ನೋಡಬೇಕು ಎಂಬುದಾದರೂ ನಿನಗೆ ತಿಳಿದಿದೆಯೇ?” ಎಂದು ಆ ಗಂಡು ಗಿಣಿ ಕೇಳಿತು.

ಪ್ರಶ್ನೆಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನ ಪಡುತ್ತಾ ಅವನನ್ನೇ ದಿಟ್ಟಿಸಿ ನೋಡುತ್ತಿದ್ದೆ. ಮುಂದಿನ ಕ್ಷಣದಲ್ಲಿಯೇ ನನ್ನ ಮೇಲೆ ಪ್ರಶ್ನೆಗಳ ಸುರಿಮಳೆಯೇ ಆಯಿತು!

"ಅದು ಎಷ್ಟು ಚಿಕ್ಕದು?"

"ಗುಬ್ಬಚ್ಚಿಯಷ್ಟು ಚಿಕ್ಕದಾ?"

"ಅಥವಾ ಇನ್ನೂ ಚಿಕ್ಕದಾ?"

"ಹಸಿರು ಎಂದೆಯಲ್ಲವೇ?... ಪೂರ್ತಿ ಹಸಿರಾ?"

"ಇರಲಾರದು ... ಯಾವ ರೀತಿಯ ಹಸಿರು? ಎಷ್ಟು ಹಸಿರು?"

"ಅದಕ್ಕೆ ಮೊಟುಕು ಕೊಕ್ಕೋ? ದಪ್ಪ ಕೊಕ್ಕೋ? ಅಥವಾ ತೆಳ್ಳನೆಯ ಡೊಂಕು ಕೊಕ್ಕೋ?"

ನಾನು ಅಸಹಾಯಕಳಾಗಿ ನೋಡುತ್ತಿದ್ದೆ. ಆ ಮರದ ಮೇಲಿದ್ದ ಒಂದೊಂದು





ಪಕ್ಷಿಯೂ ಪ್ರಶ್ನೆ ಕೇಳಲಾರಂಭಿಸಿದುವು. ನಾನು 'ಟುಕ್... ಟುಕ್... ಟುಕ್...' ಎಂದು ಕೂಗುವ ಪುಟ್ಟ ಹಸಿರು ಪಕ್ಷಿಯನ್ನು ಹುಡುಕುತ್ತಿದ್ದೆ, ಅಷ್ಟೆ. ನನ್ನ ಹುಡುಕಾಟ ಇಷ್ಟೊಂದು ಕಷ್ಟದ್ದು ಮತ್ತು ಅದು ನನ್ನನ್ನು ಇಷ್ಟೊಂದು ತೊಂದರೆಗಳಿಗೆ ಸಿಲುಕಿಸಬಹುದು ಎಂಬುದನ್ನು ನಾನು ಯೋಚಿಸಿಯೇ ಇರಲಿಲ್ಲ.

"ಓ, ಅವಳು ಅಲ್ಲಿಯೇ ಇದ್ದಾಳೆ. ಅವಳಿಂದ ನಿನಗೆ ಸಹಾಯ ಆದರೂ ಆಗಬಹುದು" ಎಂದು ನಮ್ಮಿಂದ ಸ್ವಲ್ಪ ದೂರದಲ್ಲಿ ಇದ್ದ ಕುಂಡದಲ್ಲಿ ಖುಷಿಯಿಂದ ಸ್ನಾನ ಮಾಡುತ್ತಿದ್ದ ತಾಯಿ ಮಡಿವಾಳದತ್ತ ದಿಟ್ಟಿಸುತ್ತಾ ಕೊರವಂಕ ಹೇಳಿತು. ವಿಚಿತ್ರವೆಂದರೆ, ಆ ಮರದ ಮೇಲಿದ್ದುಕೊಂಡು ನನ್ನನ್ನು ಪ್ರಶ್ನಿಸುತ್ತಿದ್ದ ಇತರ ಪಕ್ಷಿಗಳಿಗೆ ಇದು ವಿನೋದದ ವಿಷಯದಂತೆ ತೋರುತ್ತಿತ್ತು. ಅವೆಲ್ಲವೂ ಸೇರಿ ನನ್ನನ್ನು ಅಣಕಿಸುತ್ತಿವೆಯೇನೋ ಎಂದು ನನಗೆ ಅನಿಸುತ್ತಿತ್ತು.

ಈ ಗಲಾಟೆ ತಾಯಿ ಮಡಿವಾಳದ ಸ್ನಾನದ ಖುಷಿಗೆ ಭಂಗ ತಂದಿತು. ಅಲ್ಲಿ ಏನು ನಡೆಯುತ್ತಿದೆ ಎಂಬುದನ್ನು ತಿಳಿಯಲು ಅದು ಕುಪ್ಪಳಿಸಿಕೊಂಡು ಬಂತು. ಎಲ್ಲಾ ಪಕ್ಷಿಗಳೂ ಒಟ್ಟಿಗೆ ಹೇಳಲು ಶುರು ಮಾಡಿದ್ದರಿಂದ ಅಲ್ಲಿ ಏನು ನಡೆಯುತ್ತಿದೆ ಎಂಬುದನ್ನು ತಿಳಿಯುವುದು ಮಡಿವಾಳಕ್ಕೆ ಸುಲಭವಾಗಿರಲಿಲ್ಲ. ಆದರೂ ಅದು ತಾಳ್ಮೆಯಿಂದ ಆಲಿಸಲು ಪ್ರಯತ್ನಿಸುತ್ತಿತ್ತು. ಅಷ್ಟರಲ್ಲಿಯೇ ಅಡಚಣೆ ಉಂಟಾಯಿತು. ಈ ಸಲ ತಮ್ಮ ಕರ್ಕಶ ಧ್ವನಿಯ ಮೂಲಕ ಅಳಿಲನ್ನು ಓಡಿಸುವ ಪ್ರಯತ್ನ ಅಲ್ಲಿ ನಡೆಯುತ್ತಿತ್ತು. ಆ ಹೆಣ್ಣು ಮಡಿವಾಳ ನನ್ನೆಡೆಗೆ ಉತ್ಸಾಹದಿಂದ ತಿರುಗಿ ಏನನ್ನೋ ಹೇಳುವುದರಲ್ಲಿತ್ತು.

ಅಷ್ಟರೊಳಗೆ ಮತ್ತೆ ನನಗೆ ಆ ಧ್ವನಿ ಎಲ್ಲೋ ದೂರದಿಂದ ಕೇಳ ತೊಡಗಿತು. ‘ಟುಕ್... ಟುಕ್... ಟುಕ್... ಟುಕ್... ಟುಕ್...’





ಹೆಣ್ಣು ಮಡಿವಾಳಕ್ಕೂ ಆ ಧ್ವನಿ ಕೇಳಿಸಿತ್ತು. ಅಳಿಲನ್ನು ಓಡಿಸಿ, ಬುಸುಗುಟ್ಟುವುದನ್ನು ನಿಲ್ಲಿಸಿ ತನ್ನ ಪೊಟರೆಯ ಬಳಿ ಶಾಂತವಾಗಿ ಕುಳಿತಿದ್ದ ಆ ಪುಟ್ಟ ಪಕ್ಷಿಯನ್ನು ನೋಡಿ ಮಡಿವಾಳ ನಿಟ್ಟುಸಿರು ಬಿಟ್ಟಿತು. ಸುದೀರ್ಘವಾಗಿ ಉಸಿರೆಳೆದುಕೊಳ್ಳುತ್ತಾ "ನಿಮ್ಮ ಮನೆಯ ಹಿಂಭಾಗದಲ್ಲಿರುವ ಅರಳಿ ಮರದಲ್ಲಿ ಗೂಡುಕಟ್ಟಿಕೊಂಡಿರುವ ಕಾಗೆಗೆ ಒಂದು ಸುದ್ದಿ ಮುಟ್ಟಿಸಬಲ್ಲೆಯಾ? ಒಂದು ಕೋಗಿಲೆಯ ಕಾಕ ದೃಷ್ಟಿ ನಿನ್ನ ಗೂಡಿನ ಮೇಲೆ ಬಿದ್ದಿದೆ ಎಂಬುದನ್ನು ಅವಳಿಗೆ ತಿಳಿಸಿ ಹೇಳು,"ಎಂದು ನನಗೆ ಹೇಳಿತು.

ತುರ್ತು ಸಂದೇಶ ನೀಡಲು ನಾನು ತಕ್ಷಣ ಅಲ್ಲಿಂದ ಹೊರಟೆ. ಎಚ್ಚರಿಕೆ ಸಂದೇಶ ಮುಟ್ಟಿಸುವುದಕ್ಕೆ ಆ ಹೆಣ್ಣು ಮಡಿವಾಳವೇ ಹೋಗಬಹುದಿತ್ತಲ್ಲ ಎಂಬ ಆಲೋಚನೆ ನನಗೆ ಬರಲೇ ಇಲ್ಲ. ನಾನು ಬೇಗ ಬೇಗ ನಾಲ್ಕು ಮಹಡಿ ಹತ್ತಿ ಮೇಲ್ಛಾವಣಿ

ತಲುಪಿದೆ. ಅಲ್ಲಿಯೇ ಬಾಯಿ ಬಿಟ್ಟುಕೊಂಡು ಆಶ್ಚರ್ಯದಿಂದ ನೋಡುತ್ತಾ ನಿಂತೆ. ಸುಬಾಬುಲ್ ಮರದ ಎತ್ತರದ ತೆಳ್ಳನೆಯ ಕೊಂಬೆಯ ಮೇಲೆ ಆ ಪುಟ್ಟ ಬುಸುಗುಡುವ ಪಕ್ಷಿಯನ್ನೇ ಹೋಲುತ್ತಿದ್ದ ಇನ್ನೊಂದು ಪಕ್ಷಿ ಇತ್ತು. ಅದು ತನ್ನ ತಲೆಯನ್ನು ಆ ಕಡೆಯಿಂದ ಈ ಕಡೆಗೆ, ಈ ಕಡೆಯಿಂದ ಆ ಕಡೆಗೆ ತಿರುಗಿಸುತ್ತಿತ್ತು; ಅದರ ಗಂಟಲಿನ ಭಾಗ ಹೊರಕ್ಕೆ ಉಬ್ಬುತ್ತಿತ್ತು, ಒಳಕ್ಕೆ ಇಳಿಯುತ್ತಿತ್ತು; ಅದು ಲಯಬದ್ಧವಾಗಿ 'ಟುಕ್... ಟುಕ್... ಟುಕ್... ಟುಕ್...' ಎಂದು ಕೂಗುತ್ತಲಿತ್ತು. ಇದೇ ನಾನು ನೋಡ ಬಯಸಿದ್ದ ಆ ಪುಟ್ಟ ಹಸಿರು ಪಕ್ಷಿ–ಕಾಪರ್‌ಸ್ಮಿತ್!

ನನ್ನನ್ನು ಓಡಲು ಹಚ್ಚಿದ್ದು ಕೇವಲ ಒಂದು ನೆಪವಾಗಿತ್ತು. ಮೆಚ್ಚುಗೆಯಿಂದ ಮನಸ್ಸು ತುಂಬಿಬಂದಿತ್ತು. ಮನಸ್ಸಿನಲ್ಲಿಯೇ ಹೆಣ್ಣು ಮಡಿವಾಳಕ್ಕೆ ಧನ್ಯವಾದ ಅರ್ಪಿಸಿದೆ.

***





ಕಂದು–ತಲೆಯ ಕುಟಿಗಗಳು(The Brown-headed Barbets)



ಹೆಣ್ಣು ಮಡಿವಾಳ (Lady Magpie Robin)



ಕಂಚು ಕುಟಿಗ–ಆ ಪುಟ್ಟ ಹಸಿರು ಪಕ್ಷಿ! (Coppersmith Barbet)



## ಇತರ ಶೀರ್ಷಿಕೆಗಳು

ಒಳ್ಳೆಯ ಕೆಲಸ

ಅನುಕೂಲದ ಆಶ್ರಯ

ಆ ನಿಗೂಢ ಮೊಟ್ಟೆಗಳು

Vidya Online

A PARTNERSHIP FOR TEACHERS, CHILDREN AND EDUCATION

Visit http://vidyaonline.net for more titles